| | | | | | | | | | | | | |
|---|---|---|---|---|---|---|---|---|---|---|---|---|
| 34 | ಶ್ರೀ ಎಲ್. ವೆಂಕಟೇಶ್ ಬಿನ್ ಸಿ. ಲೇಜರ್ | 27.05.1975 | ನಾಡರ್–2ಎ | 01.07.1995 | 9 ನೇ ತರಗತಿ ಅನುತೀರ್ಣ ದಿ: 10.04.1991 | 9 ನೇ ತರಗತಿ ಅನುತೀರ್ಣ ದಿ: 10.04.1991 | ಹೆಲ್ಪರ್ ಕಮ್ ಕ್ಲೀನರ್ 7 ನೇ ತರಗತಿ | ಹೆಲ್ಪರ್ ಕಮ್ ಕ್ಲೀನರ್ ಡಿ ಗ್ರೂಪ್ | ದಿನಗೂಲಿ ನೆಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ಯಾವುದೇ ಆದೇಶ ಇರುವುದಿಲ್ಲ. ಆ ಅವಧಿಯಲ್ಲಿ ಮಾಸಿಕ ವೇತನ ರೂ. 1033.85 ನೀಡಲಾಗಿದೆ | 18 ವರ್ಷ ಸೇವಾ ವಿಚ್ಛಿನ್ನತೆ ಇರುವುದಿಲ್ಲ | ಸೇವೆಯಲ್ಲಿ ಇದ್ದಾರೆ. ವೇತನ ದಿವಸ ರೂ.226.50 ಮತ್ತು ಮಾಸಿಕ 2000/– ಹೆಚ್ಚುವರಿ ವೇತನ ಒಟ್ಟು ಮಾಸಿಕ ರೂ. 8795/– ರಂತೆ ಪಾವತಿಸಲಾಗುತ್ತಿದೆ. | |
| 35 | ಶ್ರೀ ಟಿ.ಎಸ್. ಮಾದರ. | 08.04.1977 | ಪರಿಶಿಷ್ಟ ಜಾತಿ ಎಸ್.ಸಿ | 01.01.1996 | 10ನೇ ತರಗತಿ ಎಪ್ರಿಲ್–1993 | 10ನೇ ತರಗತಿ ಎಪ್ರಿಲ್–1993 | ನೆಡುತೋಪು ವೀಕ್ಷಕರು 7ನೇ ತರಗತಿ | ನೆಡುತೋಪು ವೀಕ್ಷಕರು, ಡಿ ಗ್ರೂಪ್ | ದಿನಗೂಲಿ ನೆಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ಯಾವುದೇ ಆದೇಶ ಇರುವುದಿಲ್ಲ. ಆ ಅವಧಿ ಯಲ್ಲಿ ಮಾಸಿಕ ವೇತನ ರೂ. 1160.00 ನೀಡಲಾಗಿದೆ. | 17 ವರ್ಷ 09 ತಿಂಗಳು ಸೇವಾ ವಿಚ್ಛಿನ್ನತೆ ಇರುವುದಿಲ್ಲ | ಸೇವೆಯಲ್ಲಿ ಇದ್ದಾರೆ. ವೇತನ ದಿವಸ ರೂ.226.50 ಮತ್ತು ಮಾಸಿಕ 2000/– ಹೆಚ್ಚುವರಿ ವೇತನ ಒಟ್ಟು ಮಾಸಿಕ ರೂ. 8795/– ರಂತೆ ಪಾವತಿಸಲಾಗುತ್ತಿದೆ. | |
| 36 | ಶ್ರೀ ಎಸ್.ಟಿ. ಲಕ್ಕನಗೌಡರ | 08.05.1978 | ಹಿಂದುಳಿದ ವರ್ಗ(ಜೈನ) | 01.01.1996 | 7ನೇ ತರಗತಿ ಮಾರ್ಚ್–1994 | 7ನೇ ತರಗತಿ ಮಾರ್ಚ್–1994 | ನೆಡುತೋಪು ವೀಕ್ಷಕರು 7ನೇ ತರಗತಿ | ನೆಡುತೋಪು ವೀಕ್ಷಕರು, ಡಿ ಗ್ರೂಪ್ | ದಿನಗೂಲಿ ನೆಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ಯಾವುದೇ ಆದೇಶ ಇರುವುದಿಲ್ಲ. ಆ ಅವಧಿಯಲ್ಲಿ ಮಾಸಿಕ ವೇತನ ರೂ. 1160.00 ನೀಡಲಾಗಿದೆ. | 17 ವರ್ಷ 09 ತಿಂಗಳು ಸೇವಾ ವಿಚ್ಛಿನ್ನತೆ ಇರುವುದಿಲ್ಲ | ಸೇವೆಯಲ್ಲಿ ಇದ್ದಾರೆ. ವೇತನ ದಿವಸ ರೂ.226.50 ಮತ್ತು ಮಾಸಿಕ 2000/– ಹೆಚ್ಚುವರಿ ವೇತನ ಒಟ್ಟು ಮಾಸಿಕ ರೂ.8795/– ರಂತೆ ಪಾವತಿಸಲಾಗುತ್ತಿದೆ. | |
| 37 | ಶ್ರೀ ಬಿ.ಐ. ಪಾಟೀಲ. | 11.05.1969 | ಸಾಮಾನ್ಯ ವರ್ಗ (ಮರಾಠ) | 01.02.1996 | ಪಿಯುಸಿ.1987 1ನೇ ವರ್ಷ ಉತ್ತೀರ್ಣ | ಪಿಯುಸಿ.1987 1ನೇ ವರ್ಷ ಉತ್ತೀರ್ಣ | ನೆಡುತೋಪು ವೀಕ್ಷಕರು 7ನೇ ತರಗತಿ | ನೆಡುತೋಪು ವೀಕ್ಷಕರು, ಡಿ ಗ್ರೂಪ್ | ದಿನಗೂಲಿ ನೆಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ಯಾವುದೇ ಆದೇಶ ಇರುವುದಿಲ್ಲ. ಆ ಅವಧಿಯಲ್ಲಿ ಮಾಸಿಕ ವೇತನರೂ. 1160.00 ನೀಡಲಾಗಿದೆ. | 17 ವರ್ಷ 8 ತಿಂಗಳು ಸೇವಾ ವಿಚ್ಛಿನ್ನತೆ ಇರುವುದಿಲ್ಲ | ಸೇವೆಯಲ್ಲಿ ಇದ್ದಾರೆ. ವೇತನ ದಿವಸ ರೂ.226.50 ಮತ್ತು ಮಾಸಿಕ 2000/– ಹೆಚ್ಚುವರಿ ವೇತನ ಒಟ್ಟು ಮಾಸಿಕ ರೂ. 8795/– ರಂತೆ ಪಾವತಿಸಲಾಗುತ್ತಿದೆ. | |

| | | | | | | | | | | | | |
|---|---|---|---|---|---|---|---|---|---|---|---|---|
| 38 | ಶ್ರೀ ಕೆ.ಜಿ. ಮಡಿವಾಳ. | 14.01.1970 | ಹಿಂದುಳಿದ ವರ್ಗ (ಮಡಿವಾಳ) | 01.02.1996 | ಪಿಯುಸಿ. 2ನೇವರ್ಷ ಅನುತ್ತೀರ್ಣ ಸೆಪ್ಟೆಂಬರ್ 1992 | ಪಿಯುಸಿ. 2ನೇವರ್ಷ ಅನುತ್ತೀರ್ಣ ಸೆಪ್ಟೆಂಬರ್ 1992 | ನೆಡುತೋಪು ವೀಕ್ಷಕರು 7ನೇ ತರಗತಿ | ನೆಡುತೋಪು ವೀಕ್ಷಕರು, ಡಿ ಗ್ರೂಪ್ | ದಿನಗೂಲಿ ನೆಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ಯಾವುದೇ ಆದೇಶ ಇರುವುದಿಲ್ಲ. ಆ ಅವಧಿಯಲ್ಲಿ ಮಾಸಿಕ ವೇತನ ರೂ. 1160.00 ನೀಡಲಾಗಿದೆ. | 17 ವರ್ಷ 8 ತಿಂಗಳು ಸೇವಾ ವಿಚ್ಛಿನ್ನತೆ ಇರುವುದಿಲ್ಲ | ಸೇವೆಯಲ್ಲಿ ಇದ್ದಾರೆ. ವೇತನ ದಿವಸ ರೂ.226.50 ಮತ್ತು ಮಾಸಿಕ 2000/– ಹೆಚ್ಚುವರಿ ವೇತನ ಒಟ್ಟು ಮಾಸಿಕ ರೂ.8795/– ರಂತೆ ಪಾವತಿಸಲಾಗುತ್ತಿದೆ. | |
| 39 | ಶ್ರೀ ಎ.ಎನ್. ಪಾಟೀಲ. | 01.06.1976 | ಹಿಂದುಳಿದ ವರ್ಗ (ಜೈನ್) | 01.03.1996 | 10ನೇ ತರಗತಿ ಅನುತ್ತೀರ್ಣ ಎಪ್ರಿಲ್–1993. | 10ನೇ ತರಗತಿ ಅನುತ್ತೀರ್ಣ ಎಪ್ರಿಲ್–1993. | ನೆಡುತೋಪು ವೀಕ್ಷಕರು 7ನೇ ತರಗತಿ | ನೆಡುತೋಪು ವೀಕ್ಷಕರು, ಡಿ ಗ್ರೂಪ್ | ದಿನಗೂಲಿ ನೆಲೆಯಲ್ಲಿ ಕೆಲಸ ಮಾಡುತ್ತಿರುವುದರಿಂದ ಯಾವುದೇ ಆದೇಶ ಇರುವುದಿಲ್ಲ. ಆ ಅವಧಿಯಲ್ಲಿ ಮಾಸಿಕ ವೇತನ ರೂ. 1200.00 ನೀಡಲಾಗಿದೆ. | 17 ವರ್ಷ 7 ತಿಂಗಳು ಸೇವಾ ವಿಚ್ಛಿನ್ನತೆ ಇರುವುದಿಲ್ಲ | ಸೇವೆಯಲ್ಲಿ ಇದ್ದಾರೆ. ವೇತನ ದಿವಸ ರೂ.226.50 ಮತ್ತು ಮಾಸಿಕ 2000/– ಹೆಚ್ಚುವರಿ ವೇತನ ಒಟ್ಟು ಮಾಸಿಕ ರೂ. 8795/– ರಂತೆ ಪಾವತಿಸಲಾಗುತ್ತಿದೆ. | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ.ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

(ವನ್ಯಜೀವಿ ಮತ್ತು ಯೋಜನೆಗಳು)

**PR. 384**

**SC. 300**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 11 ಎಆರ್‌ಬಿ 2012, ಬೆಂಗಳೂರು, ದಿನಾಂಕ: 18.07.2014**

ಭಾರತ ಸಂವಿಧಾನದ 166 ನೇ ಅನುಚ್ಛೇದದ ಕಲಮು (2) ಮತ್ತು (3) ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು, 1977, ಇದಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕೆಳಕಂಡ ನಿಯಮಗಳನ್ನು ಈ ಮೂಲಕ ರಚಿಸಿದ್ದಾರೆ. ಎಂದರೆ,–

1. **ಶೀರ್ಷಿಕೆ ಮತ್ತು ಪ್ರಾರಂಭ;–** 1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) (ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.

   2) ನಿಯಮ 5, ದಿನಾಂಕ: 14ನೇ ಅಕ್ಟೋಬರ್ 2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬಂದಿದೆಯೆಂದು ಭಾವಿಸತಕ್ಕದ್ದು. ಉಳಿದ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರುತ್ತವೆ.

2. **ಅನುಸೂಚಿ I ಕ್ಕೆ ತಿದ್ದುಪಡಿ :–** ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು,1977 ರಲ್ಲಿ (ಇನ್ನು ಮುಂದೆ ಸದರಿ ನಿಯಮಗಳೆಂದು ಕರೆಯಲಾಗುವ), ಅನುಸೂಚಿ I ರಲ್ಲಿ **"ಸಚಿವ ಸಂಪುಟ ವ್ಯವಹಾರಗಳ ಇಲಾಖೆ"** ಶೀರ್ಷಿಕೆಯಡಿ **"ಡಿ. ರಾಜಕೀಯ"** ಉಪ ಶೀರ್ಷಿಕೆಯಡಿ, ಕ್ರಮ ಸಂಖ್ಯೆ.2 ನ್ನು ಕೈಬಿಡತಕ್ಕದ್ದು.

3. **ಅನುಸೂಚಿ II ಕ್ಕೆ ತಿದ್ದುಪಡಿ :–** ಸದರಿ ನಿಯಮಗಳ ಅನುಸೂಚಿ II ರಲ್ಲಿ **"ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ"** ಶೀರ್ಷಿಕೆಯಡಿ **"ಎಲ್. ಆಡಳಿತ ಸುಧಾರಣೆಗಳು"** ಉಪ ಶೀರ್ಷಿಕೆಯಡಿ ಕ್ರಮ ಸಂಖ್ಯೆ: 9 ರ ನಂತರ ಈ ಕೆಳಕಂಡದ್ದನ್ನು ಸೇರ್ಪಡೆ ಮಾಡತಕ್ಕದ್ದು. ಎಂದರೆ,–

   **10. ಅಂತರ ರಾಜ್ಯ ಪರಿಷತ್ತಿಗೆ ಸಂಬಂಧಿಸಿದ ವಿಷಯಗಳು**

   **11. ದಕ್ಷಿಣ ವಲಯ ಪರಿಷತ್ತಿಗೆ ಸಂಬಂಧಿಸಿದ ವಿಷಯಗಳು.**

   **12. ರಾಜ್ಯಪಾಲರ ಭಾಷಣ.**

4. **ಅನುಸೂಚಿ XVIಎ ಗೆ ತಿದ್ದುಪಡಿ:–** ಸದರಿ ನಿಯಮಗಳ ಅನುಸೂಚಿ **XVI**ಎ ರಲ್ಲಿ **"ಕಾರ್ಮಿಕ ಇಲಾಖೆ"** ಶೀರ್ಷಿಕೆಯಡಿಯಲ್ಲಿ, ಉಪಶೀರ್ಷಿಕೆ **"ಎ. ಕಾರ್ಮಿಕ"** ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ, ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು.

**"ಎ. ಕಾರ್ಮಿಕ**

1. ಕೆಲಸಗಾರರ ನಷ್ಟ ಪರಿಹಾರ, ನೌಕರರ ಹೊಣೆಗಾರಿಕೆ, ಅಶಕ್ತತೆ ಮತ್ತು ವೃದ್ಧಾಪ್ಯ ವೇತನ
2. ದುಡಿಮೆಯ ಷರತ್ತುಗಳು, ಕನಿಷ್ಠ ಮಜೂರಿಗಳು, ಭವಿಷ್ಯ ನಿಧಿಗಳು ಮತ್ತು ಕಾರ್ಮಿಕರಿಗೆ ಸೌಕರ್ಯಗಳೂ ಸೇರಿದಂತೆ ಕಾರ್ಮಿಕ ಕಲ್ಯಾಣ
3. ಕೈಗಾರಿಕಾ ಮತ್ತು ಕಾರ್ಮಿಕ ವಿವಾದಗಳು, ಸಂಧಾನ ಮತ್ತು ಮಧ್ಯಸ್ಥಿಕೆ
4. ಕಾರ್ಮಿಕ ಸಂಘಗಳು
5. ಅಂಗಡಿಗಳು ಮತ್ತು ವಾಣಿಜ್ಯ ಸಂಸ್ಥೆಗಳು
6. ಪ್ಲಾಂಟೇಷನ್ ಕಾರ್ಮಿಕರ ವಸತಿ
7. ಬಾಲ ಕಾರ್ಮಿಕ ನಿರ್ಮೂಲನೆಗೆ ಮತ್ತು ಬಾಲ ಕಾರ್ಮಿಕ ಸೊಸೈಟಿಗೆ ಸಂಬಂಧಿಸಿದ ವಿಷಯಗಳು
8. ಅಸಂಘಟಿತ ಕಾರ್ಮಿಕರ ಕಲ್ಯಾಣ ಮತ್ತು ಕರ್ನಾಟಕ ಅಸಂಘಟಿತ ಕಾರ್ಮಿಕರ ಕಲ್ಯಾಣ ಮಂಡಳಿ
9. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮತ್ತು ಕರ್ನಾಟಕ ಕಟ್ಟಡ ಮತ್ತು ಇತರೆ ಕಾರ್ಮಿಕರ ಕಲ್ಯಾಣ ಮಂಡಳಿ
10. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ
11. ರಾಷ್ಟ್ರೀಯ ಸ್ವಾಸ್ಥ್ಯ ಬಿಮಾ ಯೋಜನೆ
12. ಕರ್ನಾಟಕ ಕಾನೂನು ಅಧ್ಯಯನ ಸಂಸ್ಥೆ
13. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ
14. ಕರ್ನಾಟಕ ಸುರಕ್ಷತಾ ಸಂಸ್ಥೆ
15. ಉದ್ಯೋಗ ವಿನಿಮಯ ಕೇಂದ್ರಗಳು, ಮಾನವ ಸಂಪನ್ಮೂಲ ಕೇಂದ್ರಗಳು ಸೇರಿದಂತೆ ರಾಷ್ಟ್ರೀಯ ಉದ್ಯೋಗ ಸೇವೆಗಳು
16. ಕೈಗಾರಿಕಾ ತರಬೇತಿ ಸಂಸ್ಥೆಗಳು, ಕೈಗಾರಿಕಾ ತರಬೇತಿ ಕೇಂದ್ರಗಳು, ಕೌಶಲ್ಯ ಅಭಿವೃದ್ಧಿ ಕೇಂದ್ರಗಳು, ಕುಶಲ ತರಬೇತಿಗಳು ಇವುಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳು.
17. ಕರ್ನಾಟಕ ವೃತ್ತಿ ತರಬೇತಿ ಮತ್ತು ಕೌಶಲ್ಯ ಅಭಿವೃದ್ಧಿ ನಿಗಮ, ಕರ್ನಾಟಕ ಕೌಶಲ್ಯ ಆಯೋಗ
18. ನೌಕರರ ರಾಜ್ಯ ವಿಮೆ (ವೈದ್ಯಕೀಯ ಸೇವೆಗಳು)

5. **ಅನುಸೂಚಿ XIX ಎ ಗೆ ತಿದ್ದುಪಡಿ:–** ಸದರಿ ನಿಯಮಗಳ ಅನುಸೂಚಿ XIXಎ ರಲ್ಲಿ, ಶೀರ್ಷಿಕೆ **"ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ"** ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು. ಎಂದರೆ,

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಅನುಸೂಚಿ XIX ಎ**

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ**

**ಎ. ಸಾಹಿತ್ಯ ಮತ್ತು ಸಂಸ್ಕೃತಿ ವ್ಯವಹಾರಗಳು**

1. ಕನ್ನಡ ಮತ್ತು ಸಂಸ್ಕೃತಿ ಇಲಾಖೆ;

   ಎ) ಕನ್ನಡ ಅಭಿವೃದ್ಧಿ ಪ್ರಾಧಿಕಾರ

   ಬಿ) ಕನ್ನಡ ಭಾಷಾ ಅಭಿವೃದ್ಧಿಗಾಗಿ ಭಾಷಾ ಸಮಿತಿ

   ಸಿ) ಕನ್ನಡ ಭಾಷೆಯ ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳು

   ಡಿ) ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿಗೆ ಸಂಬಂಧಿಸಿದಂತೆ ರಚಿಸಲಾದ ಅಕಾಡೆಮಿಗಳು

   ಇ) ದಸರಾ ಉತ್ಸವಗಳು/ಜಿಲ್ಲಾ ಉತ್ಸವಗಳು

   ಎಫ್) ವೀರ ಅಥವಾ ಪ್ರಖ್ಯಾತ ವ್ಯಕ್ತಿಗಳ ಪ್ರತಿಮೆಗಳು, ಸ್ಮಾರಕ ಭವನಗಳು, ಸಾಂಸ್ಕೃತಿಕ ಮಂದಿರಗಳು / ಜಿಲ್ಲಾ ರಂಗಮಂದಿರಗಳು

2. ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು
3. ಕರ್ನಾಟಕ ಗೆಜೆಟಿಯರ್ ಇಲಾಖೆ
4. ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ
5. ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ
6. ಚಾಮರಾಜೇಂದ್ರ ದೃಶ್ಯಕಲಾ ಸರ್ಕಾರಿ ಕಾಲೇಜು, ಮೈಸೂರು
7. ಕನ್ನಡ ಪುಸ್ತಕ ಪ್ರಾಧಿಕಾರ
8. ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ
9. ಸಹ್ಯಾದ್ರಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ
10. ವಾರ್ತಾ ಇಲಾಖೆ

    ಎ) ವಾರ್ತಾ ಮತ್ತು ಪ್ರಚಾರ

    ಬಿ) ಡಾ. ರಾಜಕುಮಾರ್ ಟ್ರಸ್ಟ್ ಮತ್ತು ಡಾ. ವಿಷ್ಣುವರ್ಧನ್ ಟ್ರಸ್ಟ್

    ಸಿ) ಚಲನಚಿತ್ರಕ್ಕೆ ಸಂಬಂಧಿಸಿದ ವಿಷಯಗಳು

    ಡಿ) ಶ್ರೀ ಕಂಠೀರವ ಸ್ಟುಡಿಯೋ ನಿಯಮಿತ, ಬೆಂಗಳೂರು.

    ಇ) ಕರ್ನಾಟಕ ಮದ್ಯಪಾನ ಸಂಯಮ ಮಂಡಳಿ

    ಎಫ್) ಕರ್ನಾಟಕ ಮಾಧ್ಯಮ ಅಕಾಡೆಮಿ

    ಜಿ) ಕರ್ನಾಟಕ ಚಲನಚಿತ್ರ ಅಕಾಡೆಮಿ

11. ರಾಜ್ಯದ ಅಧಿಕೃತ ಭಾಷೆ

**ಬಿ.ಸಂಹಿತೆಗಳು ಮತ್ತು ಕೈಪಿಡಿಗಳು**

ತನ್ನ ಆಡಳಿತ ನಿಯಂತ್ರಣದಡಿಯಲ್ಲಿ ಬರುವ ಇಲಾಖೆಗಳಿಗೆ ಸಂಬಂಧಿಸಿದ ಸಂಹಿತೆಗಳು ಮತ್ತು ಕೈಪಿಡಿಗಳನ್ನು ಸಿದ್ಧಪಡಿಸುವುದು

**ಸಿ. ನೌಕರಿ ಭರ್ತಿ ನಿಯಮಗಳು ಮತ್ತು ನೇಮಕಗಳು**

1. ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯ ಆಡಳಿತ ನಿಯಂತ್ರಣದಡಿಯಲ್ಲಿ ಬರುವ ಸೇವೆಗಳಿಗೆ ಮತ್ತು ಹುದ್ದೆಗಳಿಗೆ ಸಂಬಂಧಿಸಿದ ನೌಕರಿಭರ್ತಿ ನಿಯಮಗಳು

2. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಡಿಯಲ್ಲಿ ಬರುವವರನ್ನು ಹೊರತುಪಡಿಸಿ ಈ ಇಲಾಖೆಯ ಆಡಳಿತ ನಿಯಂತ್ರಣದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರ ನೇಮಕಗಳು, ಸ್ಥಳ ನಿಯುಕ್ತಿ, ವರ್ಗಾವಣೆ, ರಜೆ, ಇತ್ಯಾದಿ ಸೇವೆಗಳಿಗೆ ಸಂಬಂಧಿಸಿದ ವಿಷಯಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ. ಮಂಗಳ ಜಿ.ಎಸ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು)

**PR. 593**

**SC. 200**

*ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59